## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2337
2. ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಸೂರಜ್ ರೇವಣ್ಣ
3. ಉತ್ತರಿಸಬೇಕಾದ ದಿನಾಂಕ : 21.03.2022
4. ಉತ್ತರಿಸಬೇಕಾದ ಸಚಿವರು : ಮಾನ್ಯ ಜೀವಿಪರಿಸ್ಥಿತಿ ಮತ್ತು ಪರಿಸರ ಹಾಗೂ ಪ್ರವಾಸೋದ್ಯಮ ಸಚಿವರು

| | | |
|---|---|---|
| ಅ | ರಾಜ್ಯ ಸರ್ಕಾರದ ವತಿಯಿಂದ ಅಭಿವೃದ್ಧಿ ಯೋಜನೆಗಳಿಗೆ ಕೇಂದ್ರ ಸರ್ಕಾರದ ಪರಿಸರ ಮತ್ತು ಜೀವಿಶಾಸ್ತ್ರದ ಇಲಾಖೆಗೆ ಸಲ್ಲಿಸಿರುವ ಮನವಿಗಳೆಷ್ಟು; | ಅರಣ್ಯ (ಸಂರಕ್ಷಣಾ) ಕಾಯ್ದೆ, 1980ರಡಿ 1980ನೇ ಸಾಲಿನಿಂದ ಇದುವರೆಗೆ ಕೇಂದ್ರ ಸರ್ಕಾರದಿಂದ ಒಟ್ಟು 761 ಅರಣ್ಯ ತೀರುವಳಿ ಪ್ರಸ್ತಾವನೆಗಳಿಗೆ ಅನುಮೋದನೆ ದೊರೆತಿದ್ದು, ಇದೇ ಕಾಯ್ದೆಯಡಿ 47 ಅರಣ್ಯ ತೀರುವಳಿ ಪ್ರಸ್ತಾವನೆಗಳನ್ನು ಅನುಮೋದನೆಗಾಗಿ ಕೇಂದ್ರ ಸರ್ಕಾರದ ಪರಿಸರ, ಅರಣ್ಯ ಮತ್ತು ಹವಾಮಾನ ಬದಲಾವಣೆ ಮಂತ್ರಾಲಯಕ್ಕೆ ಅನುಮೋದನೆಗಾಗಿ ಸಲ್ಲಿಸಲಾಗಿದೆ. ಸದರಿ ಪ್ರಸ್ತಾವನೆಗಳು ಅನುಮೋದನೆಗಾಗಿ ಕೇಂದ್ರ ಸರ್ಕಾರದ ಹಂತಗಳಲ್ಲಿ ಬಾಕಿ ಇರುತ್ತವೆ. |
| ಆ | ಪರಿಸರ ಮತ್ತು ಮಾಲಿನ್ಯ ಇಲಾಖೆ ವತಿಯಿಂದ ಅನುಮತಿ ದೊರೆತಿರುವ ಯೋಜನೆಗಳೆಷ್ಟು; ವಿವಿಧ ಇಲಾಖೆಗಳಿಂದ ವಿಲೇವಾರಿಯಾಗದೆ ಇರುವ ಪ್ರಕರಣಗಳೆಷ್ಟು; | ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ವತಿಯಿಂದ ಜಲ (ಮಾಲಿನ್ಯ ನಿಯಂತ್ರಣ ಮತ್ತು ನಿವಾರಣೆ) ಕಾಯ್ದೆ, 1974 ರ ಸೆಕ್ಷನ್ 25/26 ರಡಿಯಲ್ಲಿ ಹಾಗು ವಾಯು (ಮಾಲಿನ್ಯ ನಿಯಂತ್ರಣ ಮತ್ತು ನಿವಾರಣೆ) ಕಾಯ್ದೆ, 1981ರ ಸೆಕ್ಷನ್ 21/22 ರಡಿಯಲ್ಲಿ ಕಲ್ಪಿಸಲಾದ ಅವಕಾಶಗಳನ್ವಯ ಏಪ್ರಿಲ್ 2021 ರಿಂದ ಮಾರ್ಚ್ 2022 ರವರೆಗೆ 180 ಸ್ಥಾಪನಾ ಸಮ್ಮತಿ ಪತ್ರ (Consent for operation) ನೀಡಲಾಗಿದೆ. |

ಸಂಖ್ಯೆ: ಅಪಜೀ 76 ಇಪಿಸಿ 2022

(ಆನಂದ್ ಸಿಂಗ್)
ಜೀವಿಪರಿಸ್ಥಿತಿ ಮತ್ತು ಪರಿಸರ ಹಾಗೂ
ಪ್ರವಾಸೋದ್ಯಮ ಸಚಿವರು